ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

5. ಅಬಕಾರಿ ಇಲಾಖೆಯಲ್ಲಿ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ

ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ):-

587 (781) ಮಾನ್ಯ ಮುಖ್ಯಮಂತ್ರಿಯವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2017ರಲ್ಲಿ ಕೋಲಾರದ ಅಬಕಾರಿ ಇಲಾಖೆಯ ಉಪ ಅಧೀಕ್ಷಕರಿಗೆ ಸಂಬಂಧಪಟ್ಟ ಉಪ ಆಯುಕ್ತರು ನ್ಯಾಯಾಲಯದಲ್ಲಿ ಅನುಕೂಲಕರವಾಗಿ ಆದೇಶ ಪಡೆಯಲು ಅವಕಾಶ ಮಾಡಿಕೊಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ಬಗ್ಗೆ ಕಾನೂನು ಪದಕೋಶದವರತು ವಿಚಾರಣೆಯನ್ನು ನಡೆಸುವ ಕುರಿತು ನೀಡಿರುವ ಕೆಲವು ಅಭಿಪ್ರಾಯವನ್ನು ಸಹ ಪಾಲನೆ ಮಾಡುವ ಬಗ್ಗೆ ಹಾಗೂ ನ್ಯಾಯಾಲಯದ ಆದೇಶ ವಿರುದ್ಧ ಮೇಲ್ಮನವಿ ಸಲ್ಲಿಸಲು ಆರ್ಥಿಕ ಇಲಾಖೆಯವರು ಮೊದಲು ಅನುಮತಿ ನೀಡಿ ತದನಂತರ, ಸರ್ಕಾರದ ಗಮನಕ್ಕೂ ತಾರದೆ ತರಾತುರಿಯಲ್ಲಿ ಅನುಮತಿ ಹಿಂಪಡೆದಿದ್ದರೆ ಕುರಿತು ಸರ್ಕಾರ ಕೈಗೊಂಡಿರುವ ಕ್ರಮವೇನು;

(ಇ) ಈ ರೀತಿ ಮೂರು ತಿಂಗಳಿಗೂ ಹೆಚ್ಚು ಅನಧಿಕೃತ ಗೈರು ಹಾಜರಾಗಿರುವ ಹಾಗೂ ಇದಕ್ಕೆ ಸಹಕಾರ ನೀಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟವನ್ನುಂಟು ಮಾಡಿರುವವರ ಮೇಲೆ ಸರ್ಕಾರ ಯಾವ ಕ್ರಮ ಕೈಗೊಳ್ಳುವುದು?